# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>**Volume 151** | ಬೆಂಗಳೂರು, ಗುರುವಾರ, ಮಾರ್ಚ್ ೩೧, ೨೦೧೬ (ಚೈತ್ರ ೧೧, ಶಕ ವರ್ಷ ೧೯೩೭)<br>**Bengaluru, Thursday, March 31, 2016 (Chaithra 11, Shaka Varsha 1937)** | ಸಂಚಿಕೆ ೧೩<br>**Issue 13** |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಗೌ: ನ್ಯಾಯಮೂರ್ತಿ ಶ್ರೀ ಎಸ್. ರಾಜೇಂದ್ರ ಬಾಬು, ಭಾರತದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಇವರನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ರಾಗವಿ 2015, ದಿನಾಂಕ: 22.06.2015.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಗೌ: ನ್ಯಾಯಮೂರ್ತಿ ಶ್ರೀ ವಿ.ಎಸ್. ಮಳೀಮಠ ಇವರನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ಗೌ: ನ್ಯಾಯಮೂರ್ತಿ ಶ್ರೀ ವಿ.ಎಸ್. ಮಳೀಮಠ ರವರ ನಿಧನದಿಂದಾಗಿ ಗಡಿ ರಕ್ಷಣಾ ಆಯೋಗದ ಅಧ್ಯಕ್ಷರ ಹುದ್ದೆಯು ಖಾಲಿ ಉಳಿದಿರುತ್ತದೆ. ಈ ಹಿನ್ನೆಲೆಯಲ್ಲಿ, ಗೌ: ನ್ಯಾಯಮೂರ್ತಿ ಶ್ರೀ ಎಸ್. ರಾಜೇಂದ್ರ ಬಾಬು, ಭಾರತದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಇವರನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ರಾಗವಿ 2016, ಬೆಂಗಳೂರು, ದಿನಾಂಕ: 08.01.2016.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು, ಗೌ:ನ್ಯಾಯಮೂರ್ತಿ ಶ್ರೀ ಎಸ್. ರಾಜೇಂದ್ರ ಬಾಬು ಭಾರತದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಇವರನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿದೆ. ಶ್ರೀಯುತರಿಗೆ ಸರ್ವೋಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಗೆ ಸರಿ ಸಮನಾದ ವೇತನ ಹಾಗೂ ಇತರೆ ಸೌಲಭ್ಯಗಳನ್ನು ನೀಡಲು ಆದೇಶಿಸಿದೆ ಹಾಗೂ ಶ್ರೀಯುತರಿಗೆ ಸಚಿವ ಸಂಪುಟ ದರ್ಜೆಯ ಸಚಿವರ ಸ್ಥಾನಮಾನವನ್ನು ಸಹ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಮಹಾದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ರಾಜಕೀಯ)

**PR. 101**
**SC. 100**

### PERSONNEL AND ADMINISTRATIVE REFORMS SECRETARIAT

**SUB:** Revocation of suspension of Sri. Alok Kumar, IPS (KN-94)-issueof orders-reg.

**READ:**
1. Government Order No. DPAR 93 SPS 2015, Dated: 23.05.2015.
2. Letter dated: 27.08.2015 of Sri. Alok Kumar, IPS,
3. Letter No. CB7/31 2015-16 of the DG & IGP (HoPF), Bengaluru dated: 24.09.2015.

**GOVERNMENT ORDER NO: DPAR 93 SPS 2015, BENGALURU, DATED; 15.10.2015.**

Whereas, an order placing Sri. Alok Kumar, IPS (KN-94), the then IGP & Additional Commissioner of Police, West, Bengaluru under suspension pending further investigation by the Criminal Investigation Department and initiation of disciplinary proceedings against him for the alleged misuse of his official position & powers in the matter relating to his involvement in illegal lottery case was issued by the Government of Karnataka, vide Government Order dated: 23.05.2015.

Whereas, Sri. Alok Kumar, IPS in his letter dated: 27.08.2015 has requested to revoke his suspension and reinstate him into service.

Whereas, the opinion of the Director General & Inspector Genenal of Police (Head of Police Force), Karnataka, was also obtained vide his letter dated: 24.09.2015, regarding revocation of suspension order of Sri. Alok Kumar, IPS and reinstating him into service.

Whereas, the matter has been examined by the Government and the Government is of the considered view that the suspension of Sri. Alok Kumar, IPS could be revoked pending initiation of disciplinary proceedings under Rule-8 of All India Service (Discipline and Appeal) Rules, 1969, against the officer.

And now, therefore, the Government of Karnataka in exercise of the powers conferred under Rule 3(7) (C) of the All India Service (Discipline and Appeal) Rules, 1969, hereby revokes the order of suspension of Sri. Alok Kumar, IPS (KN-94) and reinstates him into service with immediate effect, pending intiation of disciplinary proceedings under Rule-8 of All India Service (Discipline and Appeal) Rules, 1969, against him.

By Order and in the Name of Governor of Karnataka,

**Shivashankar Naik. L.**

Under Secretary to Government,

DP & AR (Services-IV).

**PR. 111**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆಕುಕ 156 ಸಿಜಿಇ 2014 (ಭಾಗ-1), ಬೆಂಗಳೂರು, ದಿನಾಂಕ: 22.01.2016.**

ಸರ್ಕಾರದ ಆದೇಶ ಸಂಖ್ಯೆ: ಆಕುಕ 156 ಸಿಜಿಇ 2014, ದಿನಾಂಕ: 15.10.2015ರ ಆದೇಶದಲ್ಲಿ ಕಾರ್ಮಿಕ ಇಲಾಖೆಯ ವತಿಯಿಂದ ವಿಮಾ ಯೋಜನೆ ಮಾದರಿಯಲ್ಲಿ (Insurance mode) ಕಾರ್ಯಗತಗೊಳಿಸಲಾಗುತ್ತಿರುವ ರಾಷ್ಟ್ರಿಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಹೇಗಿದೆಯೋ ಅದೇ ಸ್ಥಿತಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ವತಿಯಿಂದ ಭರವಸೆ ಮಾದರಿಯಲ್ಲಿ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಯಾವುದೇ ಸೇವೆಗಳಲ್ಲಿ ವ್ಯತ್ಯಯ ಇಲ್ಲದಂತೆ "ವರ್ಗಾಯಿಸತಕ್ಕದ್ದು ಎಂಬುದರ ಬದಲಾಗಿ **ದಿನಾಂಕ: 01.04.2016 ರಿಂದ ಜಾರಿಗೆ ಬರುವಂತೆ ವರ್ಗಾಯಿಸತಕ್ಕದ್ದು** ಹಾಗೂ ಸಂಬಂಧಿಸಿದ ಎಲ್ಲಾ ಕಡತ/ದಾಖಲೆಗಳನ್ನು ಕಾರ್ಮಿಕ ಇಲಾಖೆಯಿಂದ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ಗೆ "ಕೂಡಲೇ ವರ್ಗಾಯಿಸತಕ್ಕದ್ದು" ಎಂಬುದರ ಬದಲಾಗಿ **ದಿನಾಂಕ: 01.04.2016 ರಿಂದ ಜಾರಿಗೆ ಬರುವಂತೆ ವರ್ಗಾಯಿಸತಕ್ಕದ್ದು ಎಂದು ತಿದ್ದುಪಡಿ ಮಾಡಿ ಆದೇಶಿಸಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿ. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

(ಆರೋಗ್ಯ 1 ಮತ್ತು 2)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 115**

**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** 2ನೇ ಪಡೆ, ಕೆ.ಎಸ್.ಆರ್.ಪಿ., ಬೆಳಗಾವಿ ಘಟಕದ ರಾಯಪುರ ಉಪ ಘಟಕವನ್ನು 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವಿ ಘಟಕಕ್ಕೆ ವಹಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 460 ಪಿಇಜಿ 86, ದಿನಾಂಕ: 27:30.10.1987.
2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್.ಎಲ್.ಎನ್(5)/42/2014-15, ದಿನಾಂಕ: 19.2.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಸರ್ಕಾರದ ಆದೇಶದಲ್ಲಿ ಕೆ.ಎಸ್.ಆರ್.ಪಿ., 2ನೇ ಪಡೆ, ಖಾನಾಪುರ ಘಟಕದ (ಪ್ರಸ್ತುತ ಬೆಳಗಾವಿ) ಸಹಾಯಕ ಕಮಾಂಡೆಂಟ್‌ರವರನ್ನು ರಾಯಪುರದಲ್ಲಿರುವ ಸದರಿ ಬೆಟಾಲಿಯನ್ನಿನ 02 ಕಂಪನಿಗಳ ಮೇಲ್ವಿಚಾರಣೆಗಾಗಿ ರಾಯಪುರದಲ್ಲಿ ನೆಲೆಸುವಂತೆ ಹಾಗೂ ಇವರ ಕೇಂದ್ರ ಕಾರ್ಯಸ್ಥಾನವನ್ನು ರಾಯಪುರವೆಂದು ಪರಿಗಣಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (2) ರ ದಿನಾಂಕ:19.2.2015 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಹುಬ್ಬಳ್ಳಿ-ಧಾರವಾಡ ನಗರಗಳಲ್ಲಿ ಕಾನೂನು ಸುವ್ಯವಸ್ಥೆ ಕಾಪಾಡಲು ಮತ್ತು ಗಲಭೆಗಳನ್ನು ತಡೆಯಲು ಕೆ.ಎಸ್.ಆರ್.ಪಿ. 2ನೇ ಪಡೆ, ಬೆಳಗಾವಿ ಘಟಕವನ್ನು ರಾಯಪುರದಲ್ಲಿ ಹಾಗೂ 10ನೇ ಪಡೆಯನ್ನು ಶಿಗ್ಗಾಂವಿಯಲ್ಲಿ ಸ್ಥಾಪಿಸಲಾಗಿರುತ್ತದೆ. ರಾಯಪುರ ಉಪಘಟಕವು ಶಿಗ್ಗಾಂವಿ ಕೇಂದ್ರಸ್ಥಾನದಿಂದ ಕೇವಲ 59 ಕಿ.ಮೀ. ಅಂತರದಲ್ಲಿದ್ದು, ಬೆಳಗಾವಿ ನಗರದಿಂದ 103 ಕಿ.ಮೀ. ಅಂತರದಲ್ಲಿದ್ದು, 2ನೇ ಪಡೆಯ ರಾಯಪುರ ಉಪಘಟಕವನ್ನು ಬೆಳಗಾವಿಯಿಂದ ನಿಯಂತ್ರಿಸುವುದು ಆಡಳಿತಾತ್ಮಕ ದೃಷ್ಟಿಯಿಂದ ಕಷ್ಟಕರವಾಗಿರುತ್ತದೆ. ಆದ್ದರಿಂದ, ರಾಯಪುರ ಉಪಘಟಕದ ಕಾರ್ಯವಿಧಾನವನ್ನು ಚುರುಕುಗೊಳಿಸಲು, ಅಧಿಕಾರಿ/ಸಿಬ್ಬಂದಿಗಳನ್ನು ತುರ್ತು ಸಂದರ್ಭದಲ್ಲಿ ಕರ್ತವ್ಯಗಳಿಗೆ ನಿಯೋಜಿಸಲು ಅನುಕೂಲವಾಗುವಂತೆ ರಾಯಪುರ ಉಪಘಟಕವನ್ನು 2ನೇ ಪಡೆ, ಬೆಳಗಾವಿ ಘಟಕದಿಂದ ಬೇರ್ಪಡಿಸಿ, 10ನೇ ಪಡೆ ಶಿಗ್ಗಾಂವಿ ಘಟಕವು ಹತ್ತಿರದಲ್ಲಿರುವುದರಿಂದ ಸದರಿ ಘಟಕಕ್ಕೆ ವಹಿಸುವಂತೆಯೂ ಹಾಗೂ 2ನೇ ಪಡೆಯ ರಾಯಪುರ ಉಪಘಟಕದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಟ್ಟು 303 ಅಧಿಕಾರಿ ಮತ್ತು ಸಿಬ್ಬಂದಿ ಬಲವನ್ನು 10ನೇ ಪಡೆ, ಶಿಗ್ಗಾಂವಿ ಘಟಕಕ್ಕೆ ವಿಲೀನಗೊಳಿಸುವಂತೆ ಕೋರಿರುತ್ತಾರೆ. ಅಲ್ಲದೇ, ಇದರಿಂದ ಯಾವುದೇ ರೀತಿಯ ಆಡಳಿತಾತ್ಮಕ ತೊಂದರೆಗಳು ಉಂಟಾಗುವುದಿಲ್ಲ ಹಾಗೂ ಸರ್ಕಾರಕ್ಕೆ ಆರ್ಥಿಕ ಹೊರೆಯಾಗುವುದಿಲ್ಲ ಎಂದು ತಿಳಿಸಿದ್ದು, ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 85 ಪಿಓಪಿ 2015, ಬೆಂಗಳೂರು, ದಿನಾಂಕ:07.4.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಡಳಿತಾತ್ಮಕ ಹಿತದೃಷ್ಟಿಯಿಂದ 2ನೇ ಪಡೆ, ಕೆ.ಎಸ್.ಆರ್.ಪಿ., ಬೆಳಗಾವಿ ಘಟಕದ ರಾಯಪುರ ಉಪಘಟಕವನ್ನು ಪ್ರತ್ಯೇಕಿಸಿ, 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವಿಗೆ ವಹಿಸಲು ಹಾಗೂ ರಾಯಪುರ ಉಪಘಟಕದಲ್ಲಿನ 02 ಕಂಪನಿಗಳ ಈ ಕೆಳಕಂಡ ಮಂಜೂರಾತಿ ಬಲವನ್ನು 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವಿ ಘಟಕದ ಮಂಜೂರಾತಿ ಬಲದೊಂದಿಗೆ ವಿಲೀನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಗಳು | ಬಲ |
|---|---|---|
| 1. | ಸಹಾಯಕ ಕಮಾಂಡೆಂಟ್ | 01 |
| 2. | ಸ್ಪೆ. ಆರ್‌ಪಿಐ | 02 |
| 3. | ಸ್ಪೆ. ಆರ್‌ಎಸ್‌ಐ | 06 |
| 4. | ಸ್ಪೆ.ಎಆರ್‌ಎಸ್‌ಐ | 02 |
| 5. | ಆರ್‌ಹೆಚ್‌ಸಿ | 55 |
| 6. | ಆರ್‌ಪಿಸಿ | 213 |
| 7. | ಅನುಯಾಯಿ | 24 |
| | ಒಟ್ಟು | 303 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

**PR. 661**

**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ರಾಮನಗರ ಜಿಲ್ಲೆಯ ತಾವರೆಕೆರೆ ಹೋಬಳಿಯ ಬ್ಯಾಡರಹಳ್ಳಿ ಪೊಲೀಸ್ ಹೊರ ಠಾಣೆಯನ್ನು ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್.ಎಲ್.ಎನ್(6)17/2008–09, ದಿನಾಂಕ: 9.12.2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 9.12.2014 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಪ್ರಸ್ತಾವನೆ ಸಲ್ಲಿಸಿ, ರಾಮನಗರ ಜಿಲ್ಲೆಯ ತಾವರೆಕೆರೆ ಪೊಲೀಸ್ ಠಾಣಾ ವ್ಯಾಪ್ತಿಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಮಾಗಡಿ ತಾಲ್ಲೂಕು ವ್ಯಾಪ್ತಿಗೆ ಸೇರಿದ ಒಟ್ಟು 152 ಗ್ರಾಮಗಳು ಸೇರಿರುತ್ತವೆ. ಇದರೊಂದಿಗೆ ಬೆಂಗಳೂರು ಉತ್ತರ ತಾಲ್ಲೂಕು ವ್ಯಾಪ್ತಿಯಲ್ಲಿರುವ 3 ಬಿ.ಬಿ.ಎಂ.ಪಿ ವಾರ್ಡ್‌ನ ಪ್ರದೇಶಗಳು ಸಹ ಸೇರಿದ್ದು, ಪೊಲೀಸ್ ಠಾಣೆಯು 89.0 ಚ.ಕಿ.ಮೀ ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುತ್ತದೆ. ಈ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದ ಬ್ಯಾಡರಹಳ್ಳಿ ಪೊಲೀಸ್ ಠಾಣೆಯು ತಾವರೆಕೆರೆ ಪೊಲೀಸ್ ಠಾಣೆಯಿಂದ 15 ಕಿಲೋ ಮೀಟರ್ ದೂರ ಪೂರ್ವ ದಿಕ್ಕಿನಲ್ಲಿ ಇರುತ್ತದೆ. ಬ್ಯಾಡರಹಳ್ಳಿ ತಾತ್ಕಾಲಿಕ ಪೊಲೀಸ್ ಹೊರ ಠಾಣೆಗೆ ಸೇರಿದ ತಿಗಳರಪಾಳ್ಯ, ಅಂದ್ರಹಳ್ಳಿ, ವಿದ್ಯಾಮಾನ್ಯನಗರ, ಕಾಳಿಕಾನಗರ, ಮಹದೇಶ್ವರನಗರ, ಹೇರೋಹಳ್ಳಿ, ಬ್ಯಾಡರಹಳ್ಳಿ, ಅಂಜನಾನಗರ, ಜಿ.ಹೊಸಹಳ್ಳಿ, ದೊಡ್ಡಗೊಲ್ಲರಹಟ್ಟಿ, ಬಿ.ಇ.ಎಲ್ ಬಡಾವಣೆ, ಮುದ್ದಿನಪಾಳ್ಯ, ನುಗ್ಗಲಿಪಾಳ್ಯ, ಬಿಳಿಕಲ್ಲು, ಉಲ್ಲಾಳು ಉಪನಗರ, ಉಲ್ಲಾಳು ಬಸ್ತಿ ಗ್ರಾಮಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಸೇರಿದ್ದು, ಈ ಗ್ರಾಮಗಳು ಪರಿಪೂರ್ಣ ನಗರಗಳಾಗಿ ಹೊಸ ಬಡಾವಣೆಗಳು, ಲೇಔಟ್‌ಗಳಾಗಿರುತ್ತವೆ. ಈ ವ್ಯಾಪ್ತಿಯಲ್ಲಿ ಗಾರ್ಮೆಂಟ್ಸ್ ಹಾಗೂ ಇತರೆ ಫ್ಯಾಕ್ಟರಿಗಳು ಬಹಳಷ್ಟು ಸಂಖ್ಯೆಯಲ್ಲಿ ಇರುವುದರಿಂದ ಹೆಚ್ಚಿನ ಜನಸಂದಣಿ ಹೊಂದಿರುವ ಪ್ರದೇಶವಾಗಿರುತ್ತದೆಂದು ತಿಳಿಸಿರುತ್ತಾರೆ.

ಪ್ರಸ್ತುತ ಬ್ಯಾಡರಹಳ್ಳಿ ಠಾಣಾ ವ್ಯಾಪ್ತಿಗೆ 17 ಗ್ರಾಮ/ ಬಡಾವಣೆಗಳು ಒಳಗೊಂಡಿದ್ದು, ಅವುಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರ.ಸಂ. | ಗ್ರಾಮ ಹೆಸರು | ಕ್ರ.ಸಂ. | ಗ್ರಾಮ ಹೆಸರು |
|---|---|---|---|
| 1 | ಗೊಲ್ಲರಹಟ್ಟಿ | 10 | ಉಲ್ಲಾಳು |
| 2 | ಜಿ.ಹೊಸಹಳ್ಳಿ | 11 | ಮುದ್ದಿನಪಾಳ್ಯ |
| 3 | ಬಿಳಿಕಲ್ಲು | 12 | ಹೇರೋಹಳ್ಳಿ |
| 4 | ಬ್ಯಾಡರಹಳ್ಳಿ | 13 | ಅಂದ್ರಹಳ್ಳಿ |
| 5 | ಅಂಜನಾನಗರ | 14 | ವಿದ್ಯಾಮಾನ್ಯನಗರ |
| 6 | ಬಿ.ಇ.ಎಲ್ ಬಡಾವಣೆ | 15 | ಮಹದೇಶ್ವರನಗರ |
| 7 | ನುಗ್ಗಲಿಪಾಳ್ಯ | 16 | ಕಾಳಿಕಾನಗರ |
| 8 | ಉಲ್ಲಾಳು–ಉಪನಗರ | 17 | ತಿಗಳರಪಾಳ್ಯ |
| 9 | ಉಲ್ಲಾಳು ಬಸ್ತಿ | | |

ರಾಮನಗರ ಜಿಲ್ಲೆಯ ಮಾಗಡಿ ವೃತ್ತದ ತಾವರೆಕೆರೆ ಠಾಣಾ ವ್ಯಾಪ್ತಿಯ ಬ್ಯಾಡರಹಳ್ಳಿ ತಾತ್ಕಾಲಿಕ ಪೊಲೀಸ್ ಹೊರ ಠಾಣೆಯು 17 ಗ್ರಾಮ/ಬಡಾವಣೆಗಳು ಮತ್ತು ಇತ್ತೀಚೆಗೆ ನಿರ್ಮಾಣವಾಗುತ್ತಿರುವ ಟೌನ್‌ಶಿಪ್‌ಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿ.ಬಿ.ಎಂ.ಪಿ) ವ್ಯಾಪ್ತಿಯನ್ನು ಒಳಗೊಂಡಂತೆ, ಬೆಂಗಳೂರು ನಗರದ ಕೇಂದ್ರಭಾಗದಿಂದ ಪಶ್ಚಿಮಕ್ಕೆ ಕೇವಲ 14 ಕಿ.ಮೀ. ದೂರದಲ್ಲಿ ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಪ್ರಸ್ತಾಪಿತ ಮೇಲ್ದರ್ಜೆಗೇರಿಸುವ ಬ್ಯಾಡರಹಳ್ಳಿ ತಾತ್ಕಾಲಿಕ ಪೊಲೀಸ್ ಠಾಣಾ ಸರಹದ್ದಿನಲ್ಲಿ ಅನೇಕ ಗಾರ್ಮೆಂಟ್–ನಗರ ಕೈಗಾರಿಕಾ ಪ್ರದೇಶ, ಫ್ಯಾಕ್ಟರಿಗಳು ಇದ್ದು, ಜನರು ಉದ್ಯೋಗಕ್ಕಾಗಿ ಬೆಂಗಳೂರು ನಗರಕ್ಕೆ ಮತ್ತು ಮೇಲ್ಕಂಡ ಕೈಗಾರಿಕಾ ಸ್ಥಳಗಳಿಗೆ ಹೋಗುವುದರಿಂದ ಹಗಲು ಕಳ್ಳತನ ಪ್ರಕರಣಗಳು, ಚೈನ್ ಸ್ನ್ಯಾಚಿಂಗ್ ಪ್ರಕರಣಗಳು ಹೆಚ್ಚಾಗುವುದನ್ನು ನಿಯಂತ್ರಿಸಲು ಹಾಗೂ ಇತ್ತೀಚೆಗೆ ಒಂಟಿ ಮನೆಗಳು, ಲೇಔಟ್‌ಗಳು ಉದ್ಭವಿಸಿರುವುದರಿಂದ, ರಾತ್ರಿ ವೇಳೆಯಲ್ಲಿ ನಡೆಯಬಹುದಾದ ಮನೆ ಕಳ್ಳತನ, ದರೋಡೆ ಪ್ರಕರಣಗಳನ್ನು ತಡೆಗಟ್ಟಲು ಹಾಗೂ ಪ್ರಮುಖವಾಗಿ ಬೆಂಗಳೂರು ನಗರ ಸರಹದ್ದಿಗೆ ಸಮೀಪವಿರುವ ಗ್ರಾಮಗಳಲ್ಲಿ ಬೆಂಗಳೂರಿನ ಭೂಗತ ಜಗತ್ತಿನ ರೌಡಿ ಅಸಾಮಿಗಳ ಒಡನಾಟ ಹೆಚ್ಚುವ ಸಂಭವ ಇದ್ದು, ಇವುಗಳನ್ನು ನಿಯಂತ್ರಿಸಲು ಪೂರ್ಣ ಪ್ರಮಾಣದ ಪೊಲೀಸ್ ಇನ್ಸ್‌ಪೆಕ್ಟರ್ ದರ್ಜೆಯ ಪೊಲೀಸ್ ಠಾಣೆಯ ಅವಶ್ಯಕತೆ ಇರುತ್ತದೆ ಎಂದು ವಿವರಿಸಿರುತ್ತಾರೆ.

ಮುಂದುವರೆದು, ರಾಮನಗರ ಜಿಲ್ಲಾ ಪೊಲೀಸ್ ವ್ಯಾಪ್ತಿಯ ತಾವರೆಕೆರೆ ಪೊಲೀಸ್ ಠಾಣೆಯಲ್ಲಿ ಹಾಲಿ ಇರುವ ಮಂಜೂರಾತಿ ಬಲ 1 ಪಿಎಸ್‌ಐ, 2 ಎಎಸ್‌ಐ, 9 ಹೆಚ್‌ಸಿ, 24 ಸಿಪಿಸಿ (ಬ್ಯಾಡರಹಳ್ಳಿ ತಾತ್ಕಾಲಿಕ ಹೊರಠಾಣೆಯಲ್ಲಿರುವ ಬಲ ಒಳಗೊಂಡಂತೆ) ಇದ್ದು, ಈ ಸಿಬ್ಬಂದಿ ಬಲದಲ್ಲಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ವರದಿಯಾಗುವ ಅಪರಾಧ ಪ್ರಕರಣಗಳ ಪತ್ತೆ, ಕಾನೂನು ಸುವ್ಯವಸ್ಥೆ, ಸಂಚಾರ ನಿಯಂತ್ರಣ, ಬಂದೋಬಸ್ತ್, ಬೀಟ್ ಕರ್ತವ್ಯಗಳು ಮತ್ತು ರಕ್ಷಣೆ ಒದಗಿಸಲು ಹಾಗೂ ಠಾಣೆಯ ದಿನನಿತ್ಯದ ಕರ್ತವ್ಯಗಳಿಗೆ ಸಿಬ್ಬಂದಿಗಳು ಸಾಕಾಗುವುದಿಲ್ಲ. ಆದ್ದರಿಂದ, ಬ್ಯಾಡರಹಳ್ಳಿ ತಾತ್ಕಾಲಿಕ ಹೊರಠಾಣೆಯನ್ನು ಪೂರ್ಣ ಪ್ರಮಾಣದ ಪೊಲೀಸ್ ಇನ್ಸ್‌ಪೆಕ್ಟರ್ ದರ್ಜೆಯ ಪೊಲೀಸ್ ಠಾಣೆಯನ್ನಾಗಿ ಮೇಲ್ದರ್ಜೆಗೇರಿಸಿ ಈ ಕೆಳಕಂಡ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಿ ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

| | | |
|---|---|---|
| 1 | ಪಿ.ಐ | 1 |
| 2 | ಪಿ.ಎಸ್.ಐ | 2 |
| 3 | ಎ.ಎಸ್.ಐ | 4 |
| 4 | ಸಿ.ಹೆಚ್.ಸಿ | 18 |
| 5 | ಸಿ.ಪಿ.ಸಿ | 54 |
| 6 | ಎ.ಪಿ.ಸಿ. (ಚಾಲಕ) | 1 |
| | **ಒಟ್ಟು** | **80** |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 312 ಪಿಓಪಿ 2014, ಬೆಂಗಳೂರು, ದಿನಾಂಕ: 29.1.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಮನಗರ ಜಿಲ್ಲೆ ತಾವರೆಕೆರೆ ಹೋಬಳಿಯ ಬ್ಯಾಡರಹಳ್ಳಿ ಪೊಲೀಸ್ ಹೊರಠಾಣೆಯನ್ನು ಮೇಲ್ದರ್ಜೆಗೇರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ 649 ವೆಚ್ಚ–11/2014, ದಿನಾಂಕ: 6.1.2015 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ**

PR. 662 ಸರ್ಕಾರದ ಅಧೀನ ಕಾರ್ಯದರ್ಶಿ,

SC. 50 ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

## ಒಳಾಡಳಿತ ಸಚಿವಾಲಯ

**ವಿಷಯ:** ಬೆಂಗಳೂರು ಜಿಲ್ಲೆಯ ಕೆಲವು ಪೊಲೀಸ್ ಠಾಣೆಗಳನ್ನು ಮೇಲ್ದರ್ಜೆಗೇರಿಸಿ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಹೆಚ್ಚುವರಿ ಸಿಬ್ಬಂದಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್‌ಎಲ್‌ಎನ್(6)40/2014–15, ದಿನಾಂಕ: 19.12.2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 19.12.2014 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬೆಂಗಳೂರು ಜಿಲ್ಲೆಯಲ್ಲಿ ದಿನೇ ದಿನೇ ಜನಸಂಖ್ಯೆ, ಅಪರಾಧ ಪ್ರಕರಣಗಳು, ವಾಹನ ಅಪಘಾತಗಳು, ಭೂ ಮಾಫಿಯಾ ಹಾಗೂ ರೌಡಿಗಳ ಹಾವಳಿ, ಮುಷ್ಕರ, ರಸ್ತೆತಡೆ ಮುಂತಾದವುಗಳು ಹೆಚ್ಚಾಗಿದ್ದು, ಹಾಲಿ ಇರುವ ಸಿಬ್ಬಂದಿಗಳ ಬಲದಿಂದ ಹೆಚ್ಚಿನ ರೀತಿಯಲ್ಲಿ ಸಮರ್ಪಕವಾಗಿ ಹಾಗೂ ಸೂಕ್ತ ಭದ್ರತೆಯೊಂದಿಗೆ ಕರ್ತವ್ಯ ನಿರ್ವಹಿಸಲು ಕಷ್ಟಕರವಾಗಿರುವುದರಿಂದ ಕೆಳಕಂಡ 12 ಪೊಲೀಸ್ ಠಾಣೆಗಳನ್ನು ಮೇಲ್ದರ್ಜೆಗೇರಿಸಿ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಹೆಚ್ಚುವರಿ ಸಿಬ್ಬಂದಿಗಳನ್ನು ಮಂಜೂರು ಮಾಡುವಂತೆ ಕೋರಿದ್ದು, ಪ್ರಸ್ತಾವನೆಗೆ ಆವರ್ತಕ ವೆಚ್ಚ ರೂ.8,03,20,386/– ಮತ್ತು ಅನಾವರ್ತಕ ವೆಚ್ಚ

ರೂ.85,20,000/– ಗಳಾಗುತ್ತದೆಂದು ತಿಳಿಸುತ್ತಾ, ಪ್ರಸ್ತಾವನೆಗೆ ಮಂಜೂರಾತಿ ನೀಡುವಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರವನ್ನು ಕೋರಿರುತ್ತಾರೆ.

| ಕ್ರ. ಸಂ. | ಪೊಲೀಸ್ ಠಾಣೆ | ಜನಸಂಖ್ಯೆ | ವಿಸ್ತೀರ್ಣ ಚ.ಕಿ.ಮೀ. | 2014 ರ ಅಪರಾಧ ಪ್ರಕರಣಗಳು | ಹಾಲಿ ಇರುವ ಸಿಬ್ಬಂದಿ ಬಲ | ಹೆಚ್ಚುವರಿಯಾಗಿ ಕೋರಿರುವ ಸಿಬ್ಬಂದಿಗಳ ಬಲ |
|---|---|---|---|---|---|---|
| 1 | ವಿಜಯಪುರ | 66,757 | 54 | – | 49 | 30 |
| 2 | ನೆಲಮಂಗಲ | 50,000 | 22 | 763 | 66 | 14 |
| 3 | ಬನ್ನೇರುಘಟ್ಟ | 75,000 | 120 | 183 | 36 | 43 |
| 4 | ರಾಜಾನುಕುಂಟೆ | 52,565 | 33 | 241 | 33 | 46 |
| 5 | ದೊಡ್ಡಬಳ್ಳಾಪುರ | 84,128 | 18 | 143 | 49 | 30 |
| 6 | ಅತ್ತಿಬೆಲೆ | 1,50,000 | 10 | 221 | 36 | 43 |
| 7 | ಸರ್ಜಾಪುರ | 49,086 | 67 | 177 | 33 | 46 |
| 8 | ಹೊಸಕೋಟೆ | 1,56,000 | 146 | 597 | 62 | 19 |
| 9 | ಆನೇಕಲ್ | 98,621 | 219 | – | 49 | 30 |
| 10 | ಆವಲಹಳ್ಳಿ | 1,30,000 | 103 | – | 32 | 47 |
| 11 | ಮಾದನಾಯಕನಹಳ್ಳಿ | 1,30,000 | 81 | – | 57 | 22 |
| 12 | ಹೆಬ್ಬಗೋಡಿ | 1,78,000 | 35 | – | 36 | 43 |
| | ಒಟ್ಟು | | | | 538 | 413 |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 323 ಪಿಓಪಿ 2014, ಬೆಂಗಳೂರು, ದಿನಾಂಕ: 23.5.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೆಳಕಂಡ 3 ಪೊಲೀಸ್ ಠಾಣೆಗಳನ್ನು ಮೇಲ್ದರ್ಜೆಗೇರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

1) ನೆಲಮಂಗಲ ಪುರ ಪೊಲೀಸ್ ಠಾಣೆ
2) ಹೆಬ್ಬಗೋಡಿ ಪೊಲೀಸ್ ಠಾಣೆ
3) ಮಾದನಾಯಕನಹಳ್ಳಿ (ನೆಲಮಂಗಲ ವೃತ್ತ) ಪೊಲೀಸ್ ಠಾಣೆ

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 204 ವೆಚ್ಚ–11/2015, ದಿನಾಂಕ: 14.5.2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**PR. 663**

**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ಕೇಂದ್ರ ವಿಭಾಗದಲ್ಲಿನ ಹಲಸೂರು ಗೇಟ್ ಉಪವಿಭಾಗ ಮತ್ತು ಕಬ್ಬನ್‌ಪಾರ್ಕ್ ಉಪವಿಭಾಗವನ್ನು ಪುನರ್ ಸೃಜನೆಗೊಳಿಸುವ ಕುರಿತು.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್.ಎಲ್.ಎನ್(3)07/2015–16, ದಿನಾಂಕ: 4.6.2015.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 4.6.2015 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕದಲ್ಲಿರುವ ಕೇಂದ್ರ ವಿಭಾಗದಲ್ಲಿನ 13 ಕಾನೂನು ಮತ್ತು ಸುವ್ಯವಸ್ಥೆ ಪೊಲೀಸ್ ಠಾಣೆಗಳನ್ನು ಶೇಷಾದ್ರಿಪುರಂ ಉಪವಿಭಾಗ, ಹಲಸೂರು ಗೇಟ್ ಉಪವಿಭಾಗ ಮತ್ತು ಕಬ್ಬನ್‌ಪಾರ್ಕ್ ಉಪವಿಭಾಗಗಳೆಂದು 3 ವಿಭಾಗಗಳಾಗಿ ವಿಂಗಡಿಸಿ ಸಹಾಯಕ ಪೊಲೀಸ್ ಆಯುಕ್ತರುಗಳನ್ನು ನಿಯೋಜಿಸಲಾಗಿರುತ್ತದೆ. ಪ್ರಸ್ತುತ ಹಲಸೂರು ಗೇಟ್ ಉಪವಿಭಾಗದಲ್ಲಿ ಹಲಸೂರುಗೇಟ್, ಹಲಸೂರುಗೇಟ್ ಮಹಿಳಾ ಪೊಲೀಸ್ ಠಾಣೆ, ಎಸ್.ಆರ್.ನಗರ, ಎಸ್.ಜೆ.ಪಾರ್ಕ್, ವಿವೇಕನಗರ, ಅಶೋಕನಗರ, ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣೆಗಳಿದ್ದು, ಇದರ ವ್ಯಾಪ್ತಿಯಲ್ಲಿ ಬಿ.ಬಿ.ಎಂ.ಪಿ. ಮುಖ್ಯಕಛೇರಿ, ಜಿಲ್ಲಾಧಿಕಾರಿಗಳ ಕಛೇರಿ, ಕಾವೇರಿ ಭವನ, ಪುರಭವನ, ರವೀಂದ್ರ ಕಲಾಕ್ಷೇತ್ರ ಮುಂತಾದ ಪ್ರಮುಖ ಸ್ಥಳಗಳಲ್ಲಿ ಪ್ರತಿಭಟನೆ, ಮೆರವಣಿಗೆ, ಧರಣಿ ಮುಂತಾದವುಗಳಿಗೆ ಬಂದೋಬಸ್ತ್ ನೋಡಿಕೊಳ್ಳುವುದು ಹಾಗೂ ಅಪರಾಧ ಪ್ರಕರಣಗಳನ್ನು ನಿರ್ವಹಿಸುವುದು ಒತ್ತಡದ ಕೆಲಸವಾಗಿರುತ್ತದೆಂದು ತಿಳಿಸಿರುತ್ತಾರೆ.

ಮುಂದುವರೆದು, ಕಬ್ಬನ್‌ಪಾರ್ಕ್ ಉಪವಿಭಾಗದಲ್ಲಿ ವಿಧಾನಸೌಧ, ಕಬ್ಬನ್‌ಪಾರ್ಕ್ ಪೊಲೀಸ್ ಠಾಣೆಗಳಿದ್ದು, ವಿಧಾನಸೌಧ ಪೊಲೀಸ್ ಠಾಣೆಯಲ್ಲಿ ಅಪರಾಧ ಪ್ರಕರಣಗಳ ದಾಖಲಾತಿಯು ತೀರ ಕಡಿಮೆ ಸಂಖ್ಯೆಯಲ್ಲಿರುವುದರಿಂದ ಹೆಚ್ಚಿನ ಕೆಲಸ ಇರುವುದಿಲ್ಲ. ಆದ್ದರಿಂದ, ಹಲಸೂರುಗೇಟ್ ಹಾಗೂ

ಕಬ್ಬನ್‌ಪಾರ್ಕ್ ಉಪವಿಭಾಗಗಳಿಗೆ ಸಮಾನವಾಗಿ ಕೆಲಸಗಳನ್ನು ಹಂಚಿಕೆ ಮಾಡುವ ನಿಟ್ಟಿನಲ್ಲಿ ಸದರಿ ಉಪವಿಭಾಗಗಳನ್ನು ಕೆಳಕಂಡಂತೆ ಪುನರ್ ವಿಂಗಡಿಸಬಹುದಾಗಿದ್ದು, ಇದರಿಂದ ಸಹಾಯಕ ಪೊಲೀಸ್ ಆಯುಕ್ತರುಗಳಿಗೆ ಸಮಾನವಾಗಿ ಕೆಲಸ ಹಂಚಿಕೆಯಾಗುವುದಲ್ಲದೇ ಸಮಾನ ಜವಾಬ್ದಾರಿ ನಿಗಧಿಪಡಿಸಿದಂತಾಗುತ್ತದೆ ಹಾಗೂ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಉಂಟಾಗುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಗೆ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| **ಹಲಸೂರು ಗೇಟ್ ಉಪವಿಭಾಗ** | **ಕಬ್ಬನ್‌ಪಾರ್ಕ್ ಉಪವಿಭಾಗ** |
|---|---|
| 1) ಹಲಸೂರುಗೇಟ್ ಪೊಲೀಸ್ ಠಾಣೆ | 1) ವಿಧಾನಸೌಧ ಪೊಲೀಸ್ ಠಾಣೆ |
| 2) ಎಸ್.ಜೆ.ಪಾರ್ಕ್ ಪೊಲೀಸ್ ಠಾಣೆ | 2) ಕಬ್ಬನ್‌ಪಾಕ್ ಪೊಲೀಸ್ ಠಾಣೆ |
| 3) ಎಸ್.ಆರ್.ನಗರ ಪೊಲೀಸ್ ಠಾಣೆ | 3) ಅಶೋಕನಗರ ಪೊಲೀಸ್ ಠಾಣೆ |
| 4) ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣೆ | 4) ವಿವೇಕನಗರ ಪೊಲೀಸ್ ಠಾಣೆ |
| 5) ಹಲಸೂರುಗೇಟ್ ಮಹಿಳಾ ಪೊಲೀಸ್ ಠಾಣೆ | – |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 171 ಪಿಓಪಿ 2015, ಬೆಂಗಳೂರು, ದಿನಾಂಕ: 21.7.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಡಳಿತಾತ್ಮಕ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಕಾನೂನು ಮತ್ತು ಸುವ್ಯವಸ್ಥೆಯ ಹಿತದೃಷ್ಟಿಯಿಂದ ಹಲಸೂರುಗೇಟ್ ಹಾಗೂ ಕಬ್ಬನ್‌ಪಾರ್ಕ್ ಉಪವಿಭಾಗಗಳಿಗೆ ಸಮಾನವಾಗಿ ಕೆಲಸಗಳನ್ನು ಹಂಚಿಕೆ ಮಾಡುವ ನಿಟ್ಟಿನಲ್ಲಿ ಸದರಿ ಉಪವಿಭಾಗಗಳನ್ನು ಕೆಳಕಂಡಂತೆ ಪುನರ್ ವಿಂಗಡಿಸಿ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

| **ಹಲಸೂರು ಗೇಟ್ ಉಪವಿಭಾಗ** | **ಕಬ್ಬನ್‌ಪಾರ್ಕ್ ಉಪವಿಭಾಗ** |
|---|---|
| 1) ಹಲಸೂರುಗೇಟ್ ಪೊಲೀಸ್ ಠಾಣೆ | 1) ವಿಧಾನಸೌಧ ಪೊಲೀಸ್ ಠಾಣೆ |
| 2) ಎಸ್.ಜೆ.ಪಾರ್ಕ್ ಪೊಲೀಸ್ ಠಾಣೆ | 2) ಕಬ್ಬನ್‌ಪಾಕ್ ಪೊಲೀಸ್ ಠಾಣೆ |
| 3) ಎಸ್.ಆರ್.ನಗರ ಪೊಲೀಸ್ ಠಾಣೆ | 3) ಅಶೋಕನಗರ ಪೊಲೀಸ್ ಠಾಣೆ |
| 4) ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣೆ | 4) ವಿವೇಕನಗರ ಪೊಲೀಸ್ ಠಾಣೆ |
| 5) ಹಲಸೂರುಗೇಟ್ ಮಹಿಳಾ ಪೊಲೀಸ್ ಠಾಣೆ | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**PR. 664**
**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ಬೆಳಗಾವಿ 'ನಗರದಲ್ಲಿ ರಾಮದುರ್ಗ ಉಪವಿಭಾಗವನ್ನು ಸೃಜಿಸುವ ಕುರಿತು.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್‌ಎಲ್‌ಎನ್(4)47(ಎ)/2000–01, ದಿನಾಂಕ: 28.2.2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.2.2014 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬೆಳಗಾವಿ ಜಿಲ್ಲೆಯ ಖಾನಾಪುರ ವೃತ್ತ ಕಛೇರಿ ವ್ಯಾಪ್ತಿಗೆ ಬರುವ ಖಾನಾಪೂರ ಹಾಗೂ ನಂದಗಡ ಪೊಲೀಸ್ ಠಾಣೆಗಳು ಬೈಲಹೊಂಗಲ ಉಪವಿಭಾಗಕ್ಕೆ ಹತ್ತಿರವಿದ್ದು, ಖಾನಾಪುರ ವೃತ್ತವನ್ನು ಬೈಲಹೊಂಗಲ ಉಪವಿಭಾಗಕ್ಕೆ ಸೇರಿಸಲು ಹಾಗೂ ಪ್ರಸ್ತುತ ಬೈಲಹೊಂಗಲ ಉಪವಿಭಾಗ ವ್ಯಾಪ್ತಿಯಲ್ಲಿರುವ ರಾಮದುರ್ಗ, ಸವದತ್ತಿ ವೃತ್ತಗಳನ್ನೊಳಗೊಂಡಂತೆ ಹೊಸದಾಗಿ ರಾಮದುರ್ಗ ಉಪವಿಭಾಗವನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರವನ್ನು ಕೋರಿರುತ್ತಾರೆ.

ಮುಂದುವರೆದು, ಪ್ರಸ್ತಾಪಿತ ರಾಮದುರ್ಗ ಉಪವಿಭಾಗಕ್ಕೆ 01–ಡಿಎಸ್‌ಪಿ, 01–ಎಎಸ್‌ಐ, 02–ಸಿಎಚ್‌ಸಿ, 04–ಸಿಪಿಸಿ, 01–ಎಪಿಸಿ (ಚಾಲಕ), 01–ದ್ವಿ.ದ.ಸ. ಮತ್ತು 01 ದಲಾಯತ್ ಹುದ್ದೆಗಳನ್ನು ಸೃಜಿಸುವಂತೆ ಸಹ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 153 ಪಿಓಪಿ 2014, ಬೆಂಗಳೂರು, ದಿನಾಂಕ: 15.5.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ ರಾಮದುರ್ಗದಲ್ಲಿ ಪೊಲೀಸ್ ಉಪವಿಭಾಗವನ್ನು ಕೆಳಕಂಡ 7 ಹುದ್ದೆಗಳೊಂದಿಗೆ ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| **ಕ್ರ.ಸಂ.** | **ಹುದ್ದೆಗಳು** | **ಹುದ್ದೆಗಳ ಸಂಖ್ಯೆ** |
|---|---|---|
| 1. | ಡಿ.ವೈ.ಎಸ್.ಪಿ. | 01 |
| 2. | ಪ್ರಥಮ ದರ್ಜೆ ಸಹಾಯಕ | 01 |
| 3. | ಬೆರಳಚ್ಚುಗಾರ | 01 |

| | | |
|---|---|---|
| 4. | ಸಿ.ಹೆಚ್.ಸಿ. | 01 |
| 5. | ಸಿ.ಪಿ.ಸಿ. | 02 |
| 6. | ಎ.ಪಿ.ಸಿ. (ಚಾಲಕ) | 01 |
| | ಒಟ್ಟು | 07 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ 528 ವೆಚ್ಚ–11:2014, ದಿನಾಂಕ: 27.4.2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**PR. 666**
**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ನಕ್ಸಲ್ ಚಟುವಟಿಕೆಗಳನ್ನು ನಿಗ್ರಹಿಸಲು ಕರ್ನಾಟಕ, ಕೇರಳ ಮತ್ತು ತಮಿಳುನಾಡಿನ ಗಡಿಭಾಗದಲ್ಲಿ 03 ಹೊಸ ನಕ್ಸಲ್ ನಿಗ್ರಹಪಡೆಗಳನ್ನು ಸ್ಥಾಪಿಸಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್.ಎಲ್.ಎನ್(2)/2/2013–14, ದಿನಾಂಕ: 1.7.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ನಕ್ಸಲ್ ನಿಗ್ರಹ ಪಡೆಯ ಬಲವರ್ಧನೆಗಾಗಿ ಅರ್ಜಿಗ್ರಾಮ, ಕೊಡಗು ಜಿಲ್ಲೆ (ಕರ್ನಾಟಕ–ಕೇರಳ ಗಡಿ), ಬೀಚನಹಳ್ಳಿ, ಮೈಸೂರು ಜಿಲ್ಲೆ (ಕರ್ನಾಟಕ–ಕೇರಳ ಗಡಿ) ಮತ್ತು ಗುಂಡ್ಲು ಪೇಟೆ, ಚಾಮರಾಜ ನಗರ ಜಿಲ್ಲೆ (ಕರ್ನಾಟಕ–ತಮಿಳುನಾಡು–ಕೇರಳ ಗಡಿ) ಗಳಲ್ಲಿ ಒಟ್ಟು 03 ಹೊಸ ನಕ್ಸಲ್ ನಿಗ್ರಹಪಡೆಯ ಕ್ಯಾಂಪ್‌ಗಳನ್ನು ಸೃಜಿಸಲು ಉದ್ದೇಶಿಸಲಾಗಿರುತ್ತೆಂದು ತಿಳಿಸುತ್ತಾ, ಹೊಸ 3 ನಕ್ಸಲ್ ನಿಗ್ರಹ ಪಡೆಯ ಕ್ಯಾಂಪ್‌ಗಳ ವಿವರವನ್ನು ಕೆಳಕಂಡಂತೆ ಸಲ್ಲಿಸುತ್ತಾ, ಪ್ರಸ್ತಾವನೆಗೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಹೊಸದಾಗಿ ಪ್ರಾರಂಭಿಸಲು ಉದ್ದೇಶಿಸಿರುವ 03 ಹೊಸ ನಕ್ಸಲ್ ನಿಗ್ರಹ ಪಡೆಯ ಕ್ಯಾಂಪ್‌ಗಳಿಗೆ ಸೃಜಿಸಬೇಕಾಗಿರುವ ಹುದ್ದೆಗಳ, ತಗಲುವ ವೆಚ್ಚದ ವಿವರ:

a) ಬೀಚನಹಳ್ಳಿ, ಮೈಸೂರು ಜಿಲ್ಲೆ (ಕರ್ನಾಟಕ–ಕೇರಳ ಗಡಿ).

| ಹುದ್ದೆಗಳು | | | | | | | ಒಟ್ಟು |
|---|---|---|---|---|---|---|---|
| ಡಿಎಸ್‌ಪಿ | ಪಿಐ | ಆರ್‌ಎಸ್‌ಐ | ಎಪಿಸಿ | ಎಪಿಸಿ (ಚಾಲಕ) | ಪಿಸಿ (ನಿಸ್ತಂತು) | ಫಾಲೋವರ್/ ಕುಕ್ | |
| 01 | 01 | 05 | 36 | 04 | 04 | 02 | 53 |

ಸದರಿ ಕ್ಯಾಂಪ್‌ಗೆ ತಗಲುವ ಅಂದಾಜು ವೆಚ್ಚ

| ವೇತನ ವೆಚ್ಚ | ವೇತನೇತರ ವೆಚ್ಚ (ಲಕ್ಷಗಳಲ್ಲಿ) | | | | ಒಟ್ಟು |
|---|---|---|---|---|---|
| | ಕಟ್ಟಡ ವೆಚ್ಚ (ಲಕ್ಷಗಳಲ್ಲಿ) | ಆಯುಧ/ ಮದ್ದುಗುಂಡು | ವಾಹನ (ಲಕ್ಷಗಳಲ್ಲಿ) | ಇತರೆ ಸಾಧನ ಸಾಮಗ್ರಿ | |
| 1,44,29,955 | 28.37 | 36,64,527 | 22.5 | 4,93,380 | 2,36,74,862 |

b) ಅರ್ಜಿಗ್ರಾಮ, ಕೊಡಗು ಜಿಲ್ಲೆ (ಕರ್ನಾಟಕ–ಕೇರಳ ಗಡಿ)

| ಹುದ್ದೆಗಳು | | | | | | | ಒಟ್ಟು |
|---|---|---|---|---|---|---|---|
| ಡಿಎಸ್‌ಪಿ | ಪಿಐ | ಆರ್‌ಎಸ್‌ಐ | ಎಪಿಸಿ | ಎಪಿಸಿ (ಚಾಲಕ) | ಪಿಸಿ (ನಿಸ್ತಂತು) | ಫಾಲೋವರ್/ ಕುಕ್ | |
| – | 01 | 05 | 36 | 04 | 04 | 02 | 52 |

ಸದರಿ ಕ್ಯಾಂಪ್‌ಗೆ ತಗಲುವ ಅಂದಾಜು ವೆಚ್ಚ

| ವೇತನ ವೆಚ್ಚ | ವೇತನೇತರ ವೆಚ್ಚ (ಲಕ್ಷಗಳಲ್ಲಿ) | | | | ಒಟ್ಟು |
|---|---|---|---|---|---|
| | ಕಟ್ಟಡ ವೆಚ್ಚ (ಲಕ್ಷಗಳಲ್ಲಿ) | ಆಯುಧ/ ಮದ್ದುಗುಂಡು | ವಾಹನ (ಲಕ್ಷಗಳಲ್ಲಿ) | ಇತರೆ ಸಾಧನ ಸಾಮಗ್ರಿ | |
| 1,44,29,952 | 28.37 | 36,64,527 | 22.5 | 4,85,760 | 2,36,67,239 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



c) ಗುಂಡ್ಲು ಪೇಟೆ, ಚಾಮರಾಜ ನಗರ ಜಿಲ್ಲೆ (ಕರ್ನಾಟಕ–ತಮಿಳುನಾಡು–ಕೇರಳ ಗಡಿ)

| ಹುದ್ದೆಗಳು | | | | | | | ಒಟ್ಟು |
|---|---|---|---|---|---|---|---|
| ಡಿಎಸ್‌ಪಿ | ಪಿಐ | ಆರ್‌ಎಸ್‌ಐ | ಎಪಿಸಿ | ಎಪಿಸಿ (ಚಾಲಕ) | ಪಿಸಿ (ನಿಸ್ತಂತು) | ಫಾಲೋವರ್/ ಕುಕ್ | |
| – | 01 | 05 | 36 | 04 | 04 | 02 | 52 |

ಸದರಿ ಕ್ಯಾಂಪ್‌ಗೆ ತಗಲುವ ಅಂದಾಜು ವೆಚ್ಚ

| ವೇತನ ವೆಚ್ಚ | ವೇತನೇತರ ವೆಚ್ಚ (ಲಕ್ಷಗಳಲ್ಲಿ) | | | | ಒಟ್ಟು |
|---|---|---|---|---|---|
| | ಕಟ್ಟಡ ವೆಚ್ಚ (ಲಕ್ಷಗಳಲ್ಲಿ) | ಆಯುಧ/ ಮದ್ದುಗುಂಡು | ವಾಹನ (ಲಕ್ಷಗಳಲ್ಲಿ) | ಇತರೆ ಸಾಧನ ಸಾಮಗ್ರಿ | |
| 1,44,29,952 | 74.37 | 36,64,527 | 22.5 | 4,85,760 | 2,82,67,239 |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 191 ಪಿಓಪಿ 2015, ಬೆಂಗಳೂರು, ದಿನಾಂಕ: 7.9.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನಕ್ಸಲ್ ನಿಗ್ರಹ ಪಡೆಯ ಬಲವರ್ಧನೆಗಾಗಿ ಅರ್ಜಿಗ್ರಾಮ, ಕೊಡಗು ಜಿಲ್ಲೆ (ಕರ್ನಾಟಕ–ಕೇರಳ ಗಡಿ), ಬೀಚನಹಳ್ಳಿ, ಮೈಸೂರು ಜಿಲ್ಲೆ (ಕರ್ನಾಟಕ–ಕೇರಳ ಗಡಿ) ಮತ್ತು ಗುಂಡ್ಲು ಪೇಟೆ, ಚಾಮರಾಜ ನಗರ ಜಿಲ್ಲೆ (ಕರ್ನಾಟಕ–ತಮಿಳುನಾಡು–ಕೇರಳ ಗಡಿ) ಗಳಲ್ಲಿ ಒಟ್ಟು 03 ಹೊಸ ನಕ್ಸಲ್ ನಿಗ್ರಹಪಡೆಯ ಕ್ಯಾಂಪ್‌ಗಳನ್ನು ಸೃಜಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟದ ಪ್ರಕರಣ ಸಂಖ್ಯೆ. ಸಿ. 448/2015 ದಿನಾಂಕ: 31.8.2015 ರ ನಿರ್ಣಯದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**PR. 687**
**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯಲ್ಲಿ ಹೊಸದಾಗಿ ಸೃಜಿಸಿರುವ ರಾಮದುರ್ಗ ಉಪವಿಭಾಗದ ವ್ಯಾಪ್ತಿ ಕುರಿತು ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 153 ಪಿಓಪಿ 2014, ದಿನಾಂಕ: 15.5.2015.

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್‌ಎಲ್‌ಎನ್(4)47(ಎ)/2000–01, ದಿನಾಂಕ: 3.9.2015.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ರಾಮದುರ್ಗದಲ್ಲಿ ಪೊಲೀಸ್ ಉಪವಿಭಾಗವನ್ನು 07 ಹುದ್ದೆಗಳೊಂದಿಗೆ ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ (2) ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ರಾಮದುರ್ಗ ಉಪವಿಭಾಗದ ವ್ಯಾಪ್ತಿಗೆ ರಾಮದುರ್ಗ, ಸವದತ್ತಿ ವೃತ್ತ ಕಛೇರಿಗಳನ್ನು ಒಳಪಡಿಸಲು ಹಾಗೂ ಬೈಲಹೊಂಗಲ ಉಪವಿಭಾಗದ ವ್ಯಾಪ್ತಿಗೆ ಪ್ರಸ್ತುತ ಬೆಳಗಾವಿ ನಗರ ವ್ಯಾಪ್ತಿಯಲ್ಲಿರುವ ಬೆಳಗಾವಿ ಗ್ರಾಮಾಂತರ ಉಪವಿಭಾಗದ ಖಾನಾಪುರ ವೃತ್ತ ಕಛೇರಿಯನ್ನು ಒಳಪಡಿಸಿ ಅಧಿಸೂಚನೆ ಹೊರಡಿಸುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 230 ಪಿಓಪಿ 2015, ಬೆಂಗಳೂರು, ದಿನಾಂಕ: 31.10.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ ರಾಮದುರ್ಗ ಹಾಗೂ ಬೈಲಹೊಂಗಲ ಉಪವಿಭಾಗಗಳ ವ್ಯಾಪ್ತಿಗೆ ಈ ಕೆಳಕಂಡ ಪೊಲೀಸ್ ವೃತ್ತಗಳನ್ನು ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

| ಜಿಲ್ಲೆ | ಉಪವಿಭಾಗದ ಹೆಸರು | ಪೊಲೀಸ್ ವೃತ್ತಗಳ ಹೆಸರು |
|---|---|---|
| ಬೆಳಗಾವಿ ಜಿಲ್ಲೆ | 1) ರಾಮದುರ್ಗ ಉಪವಿಭಾಗ | 1) ರಾಮದುರ್ಗ ವೃತ್ತ<br>2) ಸವದತ್ತಿ ವೃತ್ತ |
| | 2) ಬೈಲಹೊಂಗಲ ಉಪವಿಭಾಗ | ಖಾನಾಪುರ ವೃತ್ತ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**PR. 688**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59